ಡಾ॥ ರಾಧಾ ಕೃಷ್ಣಮೂರ್ತಿ

# ಶಿವತತ್ವರತ್ನಾಕರದಲ್ಲಿ ಚೆನ್ನಮ್ಮಳ ವರ್ಣನೆ

ಕೆಳದಿ ಬಸವರಾಜ (ಕ್ರಿ. ಶ. ೧೬೯೪–೧೭೧೪) ನಿಂದ ಸಂಸ್ಕೃತದಲ್ಲಿ ರಚಿಸಲ್ಪಟ್ಟಿರುವ ಶಿವತತ್ವರತ್ನಾಕರ (ಶಿ. ತ. ರ.)ಒಂದು ಬೃಹತ್ ವಿಶ್ವಜ್ಞಾನಕೋಶವಾಗಿದೆ. ಕೆಳದಿಯ ಬಸವರಾಜ ಕರ್ನಾಟಕದ ವಿದ್ವಾಂಸ–ರಾಜನೆಂದು ಗುರುತಿಸಲ್ಪಟ್ಟಿದ್ದಾನೆ. ಅಪೂರ್ವವಾದ ವಿಶ್ವಜ್ಞಾನಕೋಶ ಶಿ.ತ.ರ. ಅಲ್ಲದೆ ಸಂಸ್ಕೃತದ 'ಶುಭಾಷಿತ ಸುರದ್ರುಮ' ಹಾಗೂ ಭಾಗಶಃ ಕನ್ನಡ ಮತ್ತು ಭಾಗಶಃ ಸಂಸ್ಕೃತದಲ್ಲಿ ಇರುವ 'ಸೂಕ್ತಿಸುಧಾರಕ' ಎಂಬ ಎರಡು ಗ್ರಂಥಗಳ ಕರ್ತೃತ್ವವೂ ಇವರಿಗಿದೆ. ಶ್ರೀ ಸಿದ್ಧಾಂತ ಶಿಖಾಮಣಿಗೆ ಟೀಕೆಯನ್ನು ಬರೆದಿದ್ದಾರೆಂಬ ಪ್ರತೀತಿಯೂ ಇದೆ. ಅವನು ಆಶ್ರಯದಾತನಾಗಿ ವಿದ್ವಾಂಸರನ್ನು ಚೆನ್ನಾಗಿ ಗೌರವಿಸುತ್ತಿದ್ದುದರಿಂದ ಅವನಿಗೆ 'ಸೂರನಿಕರ ಕಲ್ಪದ್ರುಮ' (ವಿದ್ವಾಂಸರ, ಕಲ್ಪವೃಕ್ಷ) ಎಂದು ಬಿರುದಿತ್ತು.

ಅದ್ಭುತವಾದ ಶಿ.ತ.ರ. ೧೫೦೦೦ಕ್ಕೂ ಹೆಚ್ಚಾಗಿ ಶ್ಲೋಕಗಳನ್ನು ಹೊಂದಿದೆ. ಮತ್ತು ದೈವನಿಷ್ಠೆ, ತತ್ವಜ್ಞಾನ, ಚರಿತ್ರೆ, ಸಾಹಿತ್ಯಸಂಪತ್ತು, ಕಲಾಕೌಶಲ್ಯ, ವಿಜ್ಞಾನ, ಯುದ್ಧಸ್ಥಿತಿ ಮುಂತಾದ ಪ್ರಾಚ್ಯ ಸಂಸ್ಕೃತಿಯ ಎಲ್ಲಾ ಭಾಗದ ಅನೇಕ ಬಗೆಯ ವಿಷಯಗಳನ್ನು ಪ್ರತಿಪಾದಿಸುತ್ತದೆ. ಇದು ಒಂಭತ್ತು ಭಾಗಗಳಾಗಿ ವಿಭಾಗಿಸಲ್ಪಟ್ಟಿದೆ. ಅವುಗಳನ್ನು 'ಕಲ್ಲೋಲ' ಎಂದು ಕರೆಯುತ್ತಾರೆ. ಕಲ್ಲೋಲಗಳಲ್ಲಿ, ತರಂಗಗಳೆಂಬ ಅನೇಕ ಅಧ್ಯಾಯಗಳಿರುತ್ತವೆ. ಈ ಸಂಪೂರ್ಣ ಗ್ರಂಥದಲ್ಲಿ ೧೦೮ ತರಂಗಗಳಿವೆ.

ಶಿ.ತ.ರ.ದ ಗ್ರಂಥಕರ್ತನು ರಾಜವಂಶದ ಚರಿತ್ರೆಯನ್ನು ಮುಖ್ಯ ಕಥೆಯನ್ನಾಗಿ ಆಯ್ದುಕೊಂಡಿದ್ದಾನೆ. ಇದರ ಸುತ್ತಲೂ ವಿವಿಧ ಪ್ರಕರಣಗಳಿಗೆ ಪ್ರಾಮುಖ್ಯ ಕೊಟ್ಟು, ಒಟ್ಟುಗೂಡಿಸಿ ಈ ಮಹಾಕಥೆಯನ್ನು ಹೆಣೆದಿದ್ದಾನೆ ಮತ್ತು ಶೃಂಗರಿಸಿದ್ದಾನೆ. ಕೆಳದಿಯ ಪ್ರಭುಗಳ ರಾಜಕೀಯ ಇತಿಹಾಸದ ಅಮೂಲ್ಯ ವೃತ್ತಾಂತಗಳಲ್ಲದೆ, ಸಂಸ್ಥಾಪಕ ಚೌಡಪ್ಪನಿಂದ ಶಿ.ತ.ರ.ದ ಗ್ರಂಥಕರ್ತರವರೆಗೆ, ವಿಜಯನಗರ ಸಾಮ್ರಾಜ್ಯದ ಸ್ಥಾಪನೆ, ಸುಪ್ರಸಿದ್ಧ ವಿದ್ಯಾರಣ್ಯರ ಜೀವನಕ್ಕೆ ಸಂಬಂಧಪಟ್ಟ ಕೆಲವು ಘಟನೆಗಳು, ಶ್ರೇಷ್ಠ ವೀರಶೈವ ಸಂತರ ಹಾಗೂ ಧರ್ಮ ಪ್ರವರ್ತಕ ಬಸವೇಶ್ವರರ ಜನನ ಮತ್ತು ಜೀವನ, ವೀರಶೈವ ತತ್ವಜ್ಞಾನದ ಸಿದ್ಧಾಂತಗಳು ಮುಂತಾದ ಇತಿಹಾಸಕ್ಕೆ ಸಂಬಂಧಪಟ್ಟ ಹಾಗೂ ಉಪಯೋಗವಾಗುವಂತಹ ಕೆಲವು ವಿಚಾರಗಳು ಈ ಗ್ರಂಥದಲ್ಲಿವೆ. ಶಿ.ತ.ರ.ದಲ್ಲಿ ಹೇಳಲಾಗಿರುವ ಹೆಚ್ಚು ಪ್ರಕರಣಗಳು ಒಂದಲ್ಲ ಒಂದು ರೀತಿ ಕೆಳದಿ ಪ್ರಭುಗಳ ಮಹತ್ಕಾರ್ಯವನ್ನು ತಿಳಿಸುತ್ತದೆ. ಆದ್ದರಿಂದ ಇದು ಕೆಳದಿ ಪ್ರಭುಗಳ ಕಥೆ, ಜ್ಞಾನದ ವಿವಿಧ ಶಾಖೆಗಳೊಂದಿಗೆ ಹಾಸುಹೊಕ್ಕಾಗಿದೆ. ಆದ್ದರಿಂದ ಕೆಳದಿ ಪ್ರಭುಗಳ ವಿಚಾರಗಳನ್ನು ಎಚ್ಚರ ವಹಿಸಿ ಒಂಭತ್ತು ಕಲ್ಲೋಲಗಳಿಂದ ತಿಳಿಯಬೇಕಾಗುತ್ತದೆ. ಆದರೆ ಈ ರೀತಿ ಪ್ರಯಾಸಕರವಾದ ಕಾರ್ಯ ಕೆಳದಿ ಇತಿಹಾಸದ ವಿಚಾರವಾಗಿ ವಿಸ್ತೃತವಾದ ವಿಷಯಗಳನ್ನು ತಿಳಿಸುತ್ತದೆ.

ಒಂದನೇ ಸೋಮಶೇಖರ ನಾಯಕನ ಪತ್ನಿ ಚೆನ್ನಮ್ಮ ದಕ್ಷಿಣ ಭಾರತದ ಇತಿಹಾಸದಲ್ಲೇ ಚಿತ್ತಾಕರ್ಷಕ ವ್ಯಕ್ತಿತ್ವವನ್ನು ಹೊಂದಿದ ಸನ್ಮಾನ್ಯಳಾದ ಮಹಿಳೆ, ಒಂದನೇ ಬಸವರಾಜನ ಸಾಕುತಾಯಿ. ಇಂತಹ

ಧೈರ್ಯ ಸಾಹಸದ ರಾಣಿ ಚೆನ್ನಮ್ಮಳ ಐತಿಹಾಸಿಕ ವೃತ್ತಾಂತಗಳನ್ನು ಪರಿಚಯಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಶಿ.ತ.ರ. ಗ್ರಂಥ ಕರ್ತರನು ಒಲುಮೆಯಿಂದ ಚೆನ್ನಮ್ಮಳ ವ್ಯಕ್ತಿತ್ವವನ್ನು ಬೆಳೆಸಿರುವುದರಿಂದ, ಕೆಳದಿಯ ಇತಿಹಾಸ, ಅದರಲ್ಲೂ ಚೆನ್ನಮ್ಮಳಿಗೆ ಸಂಬಂಧಪಟ್ಟ ಇತಿಹಾಸ ಪ್ರಾಮಾಣಿಕ ಹಾಗೂ ಬಹುಮೂಲ್ಯವಾಗಿದೆ.

ಬಸವರಾಜನು ತನ್ನ ಶಿ.ತ.ರ.ದ ಎಂಟನೇ ಕಲ್ಲೋಲದ ಎರಡು ಅಧ್ಯಾಯಗಳಲ್ಲಿ ಚೆನ್ನಮ್ಮ ಹಾಗೂ ಆಕೆಯ ಪತಿ ಸೋಮಶೇಖರ ನಾಯಕ ಇವರೀರ್ವರ ಐತಿಹಾಸಿಕ ವಿಚಾರಗಳನ್ನು ತಿಳಿಸಲು ತತ್ಪರನಾಗಿದ್ದಾನೆ. ತನ್ನ ಅಣ್ಣ ಭದ್ರಪ್ಪನ ನಂತರ ಸೋಮಶೇಖರ ನಾಯಕನು ಸಿಂಹಾಸನಾರೂಢನಾದಾಗ ಎಲ್ಲೆಲ್ಲೂ ಅನ್ಯಾಯ ತಾಂಡವವಾಡುತ್ತಿತ್ತು. ಸೋಮಶೇಖರನ ಆಳ್ವಿಕೆಯಲ್ಲಿ ನ್ಯಾಯ ಪುನಃ ನೆಲೆಯೂರಿತು. ಭದ್ರಪ್ಪ ತನ್ನ ತಮ್ಮನಿಗೆ ಬಿಲ್ಲುವಿದ್ಯೆಯಲ್ಲಿ ವಿಶೇಷ ತರಬೇತಿ ಕೊಟ್ಟಿದ್ದನು. ಮತ್ತು ಸ್ವಲ್ಪ ಸಮಯದಲ್ಲೇ ಸೋಮಶೇಖರನು '(ಇ)ಏಕಧನ್ವೀ' ಎಂಬ ಬಿರುದು ಪಡೆದನು. ಅವನು ಸರಹದ್ದಿನ ಪ್ರದೇಶದಲ್ಲಿರುವ ಪ್ರಮುಖ ಪಟ್ಟಣಗಳನ್ನು ಮತ್ತು ಉಳಿದ ಗೌಣ ರಾಜರುಗಳನ್ನು ಗೆದ್ದುಕೊಂಡನು. ನಿರಾಶ್ರಿತರಾಗಿದ್ದ ರಾಜರುಗಳಿಗೆ ಅವರವರ ಕ್ಷೇತ್ರ(ರಾಜ್ಯ)ಗಳನ್ನು ದೊರಕಿಸಿಕೊಟ್ಟನು. ಪಟ್ಟಣದ ಹಿಂಭಾಗದ ತುದಿಯಲ್ಲಿ ಒಂದು ಸುಂದರವಾದ ಮಠವನ್ನು ಕಟ್ಟಿಸಿದನು. ಪಟ್ಟಣದ ಹತ್ತಿರದಲ್ಲೇ ವಿರಕ್ತರುಗಳಿಗಾಗಿ ಅವರಿಂದ ಆಶೀರ್ವಾದ ಪಡೆಯಲು ಮತ್ತೊಂದು ಮಠವನ್ನು ಕಟ್ಟಿಸಿಕೊಟ್ಟನು. ಸಿಹಿ ನೀರಿನ ಒಂದು ದೊಡ್ಡಕೆರೆಯನ್ನು ವೀರಶೈವರ ಉಪಯೋಗಕ್ಕಾಗಿ ತೋಡಿಸಿದನು. ಆ ಸರೋವರದ ಸುತ್ತಲೂ ಸುಂದರವಾದ ಮರಗಳನ್ನು ನೆಡೆಸಿದನು.

ತನಗೆ ಅನುರೂಪಳಾದ, ಯೋಗ್ಯಳಾದ, ಉದಾತ್ತ ಗುಣಗಳಿಂದ ಕೂಡಿದ ಕನ್ಯೆ ಸಿಗದಿದ್ದ ಕಾರಣ ಸೋಮಶೇಖರನಾಯಕನು ತನ್ನ ವಿವಾಹವನ್ನು ಮುಂದೂಡುತ್ತಿದ್ದನು. ಕೊನೆಗೆ ಅವರ ವಿವಾಹ ಚೆನ್ನಮ್ಮಳೊಂದಿಗೆ ನಡೆಯಿತು.

ಶಿ.ತ.ರ.ದಲ್ಲಿ ಚೆನ್ನಮ್ಮಾಜಿಯನ್ನು ಸೋಮಶೇಖರನ ಸುಂದರ–ಸದ್ಗುಣಿ ವಧು ಎಂದು ಬಣ್ಣಿಸಲಾಗಿದೆ. ಅವಳನ್ನು ಮೂಕಾಂಬಿಕೆ ದೇವಿಯ ಅವತಾರವೆಂದು ಪ್ರಶಂಸಿಸಲಾಗಿದೆ. ಅಭ್ಯುದಯದ ಎರಡನೇ ದೇವಿಯೆಂದು ಆಕೆಯನ್ನು ಹೊಗಳುತ್ತಿದ್ದರು ಮತ್ತು ಪ್ರತಿಯೊಬ್ಬರೂ ಆಕೆಯನ್ನು ಪ್ರೀತಿಸುತ್ತಿದ್ದರು. ಕೆಲವು ಕಾಲ ಸೋಮಶೇಖರ ಆಕೆಯೊಂದಿಗೆ ಸಂತೋಷದಿಂದ ಇದ್ದನು.

ಸೋಮಶೇಖರನಿಗೆ ಚೆನ್ನಮ್ಮಳಲ್ಲಿ ಆಕೆಯ ಸಾಮರ್ಥ್ಯ ಹಾಗೂ ಬುದ್ಧಿವಂತಿಕೆಯ ಮೇಲೆ ಅಪಾರ ನಂಬಿಕೆ ಇದ್ದುದರಿಂದ, ಕಲಿಯುಗದ ದೈತ್ಯರಂತಿದ್ದ ಮ್ಲೇಚ್ಛರುಗಳನ್ನು ಸೋಲಿಸಿ, ಮೂಕಾಂಬಿಕಾದೇವಿ ಜನರನ್ನು ರಕ್ಷಿಸುವಂತೆ ನೀನೂ ರಕ್ಷಿಸು ಎಂದು ಸೋಮಶೇಖರನು ಚೆನ್ನಮ್ಮಳಿಗೆ ತಿಳಿಸಿದನು. ಈ ಆಕ್ರಮಣಕಾರಿ ಮೊಘಲರಿಂದ ಎಷ್ಟೋ ಸಭ್ಯ ಜನಗಳು ಚಿತ್ರಹಿಂಸೆಯನ್ನು ಅನುಭವಿಸುತ್ತಿದ್ದಾರೆ ಮತ್ತು ಈ ಜನಗಳ ಮನೆಗಳನ್ನು ಆಕ್ರಮಿಸಿಬಿಟ್ಟಿದ್ದಾರೆ. ಆದ್ದರಿಂದ ಈ ನಮ್ಮ ಸಭ್ಯ ಜನಗಳು ನೆಮ್ಮದಿಯಿಂದ ವಾಸಿಸುವಂತಾಗಬೇಕೆಂದು ತಿಳಿಸಿದನು. ನಮ್ಮ ಸಂಸ್ಥಾನದಲ್ಲಿ ನೆಲೆಸಿರುವ ಶತ್ರುಗಳನ್ನು ಸೋಲಿಸಬೇಕೆಂದು ಮತ್ತೆ ತಿಳಿಸಿದನು. ಧರ್ಮನಿಷ್ಠ ಗ್ರಂಥಗಳಲ್ಲಿ ತಿಳಿಸಿರುವಂತೆ ಶಿವಪೂಜೆ ಮಾಡುವ ವಿಧಾನವನ್ನು ಬೋಧಿಸಿದನು. ನಂತರ ಶಿ.ತ.ರ.ದ ಗ್ರಂಥಕರ್ತೃ ಬಸವರಾಜನ ಪಟ್ಟಾಭಿಷೇಕವನ್ನು ನೆರವೇರಿಸಿದನು. ಚೆನ್ನಮ್ಮಾಜಿಯ ಪಾಲನೆಯಲ್ಲಿ ಬಸವರಾಜನನ್ನು ಬಿಟ್ಟಾಗ ಅವನು ಇನ್ನೂ ಚಿಕ್ಕವನಾಗಿದ್ದನು. ಅವನು ವಯಸ್ಕನಾಗುವವರೆಗೂ ಆಡಳಿತಕ್ಕೆ ಸಂಬಂಧಪಟ್ಟ ವಿಷಯಗಳನ್ನು ನೋಡಿಕೊಳ್ಳಲು ಚೆನ್ನಮ್ಮಳಿಗೇ ಒಪ್ಪಿಸಿಕೊಟ್ಟಿದ್ದನು. ನಂತರ ಸೋಮಶೇಖರ ಸ್ವರ್ಗವಾಸಿಯಾದನು.

ಶತ್ರುಗಳೊಂದಿಗೆ ಸೋಮಶೇಖರನ ವ್ಯವಹಾರ ಮತ್ತು ಅಂತಿಮ ದಿನಗಳಲ್ಲಿ ಕೆಟ್ಟ ಸಹವಾಸದಲ್ಲಿ ಬಿದ್ದು ಹುಚ್ಚನಾಗಿದ್ದುದರ ಬಗ್ಗೆ ಶಿ.ತ.ರ. ಸಂಪೂರ್ಣವಾಗಿ ಮೌನವಾಗಿದೆ. ಅವನು ಆಡಳಿತ ವಹಿಸಿಕೊಂಡಾಗ ಅಲ್ಲಿ ಕುಂದಿದ ನೈತಿಕತೆಯ ಸ್ಥಿತಿಗಳನ್ನು ಮಾತ್ರ

ಶಿ.ತ.ರ. ಸೂಚಿಸಿದೆ. ಈತ ತನ್ನ ಪತ್ನಿಗೆ ಶೈವತತ್ವದಲ್ಲಿ ಆಸಕ್ತಿಯನ್ನು ಹುಟ್ಟಿಸಿದ್ದನು ಮತ್ತು ಶತ್ರುಗಳನ್ನು ನಾಶಪಡಿಸುವ ಅತಿ ಪ್ರಯಾಸವಾದ ಕಾರ್ಯವನ್ನು ವಹಿಸಿಕೊಟ್ಟಿದ್ದನು. ರಾಜ್ಯದಲ್ಲಿ ಹಾಗೂ ರಾಜ್ಯದ ಹೊರಗಿದ್ದ ರಾಜ ಪ್ರತಿರೋಧಿಗಳನ್ನು ನಿಗ್ರಹಿಸಿ ಉಳಿದ ತನ್ನ ಪತಿಯ ಅಪೂರ್ಣ ಕಾರ್ಯವನ್ನು ಚೆನ್ನಮ್ಮಳೇ ಪೂರ್ಣಗೊಳಿಸಿದಳೆಂದು ಸ್ಪಷ್ಟವಾಗಿದೆ.

ಚೆನ್ನಮ್ಮ, ಸೋಮಶೇಖರ ನಾಯಕನ ಪತ್ನಿ ತನ್ನ ಪತಿಯ ಉತ್ತರಾಧಿಕಾರಿಣಿ, ಅನೇಕ ವರ್ಷಗಳ ಕಾಲ ತನ್ನ ಪತಿಯೊಂದಿಗೆ ಜಂಟಿಯಾಗಿ ಆಡಳಿತ ನಡೆಸಿದ್ದಳು. ಶಿ.ತ.ರ.ದಲ್ಲಿ ಚೆನ್ನಮ್ಮಳ ಅಸಾಧಾರಣ ಜೀವನ ಪ್ರತಿಯೊಬ್ಬರನ್ನೂ ಆಶ್ಚರ್ಯಚಕಿತರನ್ನಾಗಿ ಮಾಡುತ್ತದೆ ಎಂದು ಬಸವರಾಜನೇ ತಿಳಿಸಿದ್ದಾನೆ. ಧೀರ ರಾಣಿಯು ನಾಲ್ಕು ಉಪಾಯಗಳಿಂದ, ಆರು ಗುಣಗಳಿಂದ, ಮೂರು ಶಕ್ತಿಗಳಿಂದ ಮತ್ತು ಸಪ್ತಾಂಗಗಳಿಂದ ಪರಿಪೂರ್ಣಳಾಗಿ ರಾಜ್ಯಭಾರವನ್ನು ಮಾಡುತ್ತಿದ್ದಳು. ನಿಯಮದಂತೆ ಶಿವಧರ್ಮವನ್ನು ಸಹ ಆಚರಿಸುತ್ತಿದ್ದಳು. ತನ್ನ ಪುತ್ರ ಬಸವರಾಜನನ್ನು ಬೆಳೆಸಲು ಮತ್ತು ವಿದ್ಯಾವಂತನನ್ನಾಗಿ ಮಾಡಲು ಬಹಳ ಶ್ರಮ ವಹಿಸುತ್ತಿದ್ದಳು. ತನ್ನ ಮಗನ ವಿವಾಹವನ್ನು ನಡೆಸಿದಳು.

ಸರಹದ್ದು ಕ್ಷೇತ್ರದಲ್ಲಿನ ಸಾಮಂತ ಮುಖ್ಯರು ದಂಗೆ ಎದ್ದು ಆಕ್ರಮಣ ಮಾಡಲಾರಂಭಿಸಿದಾಗ ಧೀರ ರಾಣಿ ತನ್ನ ಬಲವಾದ ಸೇನೆಯನ್ನು ಕಳುಹಿಸಿದಳು ಮತ್ತು ಅವರೆಲ್ಲರನ್ನೂ ಸೋಲಿಸಿದಳು. ಶತ್ರುಗಳಿಂದ ಆನೆಗಳನ್ನು, ಕುದುರೆಗಳನ್ನು ಹಾಗೂ ಬೇರೆ ಬೇರೆ ಸಂಪತ್ತನ್ನು ವಶಪಡಿಸಿಕೊಂಡಳು.

ಮುಂದೆ ಶಿ.ತ.ರ. ಚೆನ್ನಮ್ಮನ ಆಳ್ವಿಕೆಯ, ಹೆಚ್ಚು ನೆನಪಿನಲ್ಲಿ ಉಳಿಯುವಂತಹ ಘಟನೆಗಳನ್ನು ವರ್ಣಿಸುತ್ತದೆ. ಶಿವಾಜಿಯ ಮಗ ರಾಜಾರಾಮನಿಗೆ ರಕ್ಷಣೆ ನೀಡಿದ್ದಳು. ಔರಂಗಜೇಬನು ಸಾಮ್ರಾಟನಾದಾಗ ರಾಜಾರಾಮನು ಅನೇಕ ರಾಜರುಗಳನ್ನು ಸೋಲಿಸಿ ಛತ್ರಪತಿ ಎನಿಸಿಕೊಂಡಿದ್ದನು. ಅದರಿಂದ ರಾಜಾರಾಮನು ಔರಂಗಜೇಬನ ಶತ್ರುವಾಗಿದ್ದನು. ಮುಸಲ್ಮಾನರ ಮುಖ್ಯಸ್ಥ ರಾಜಾರಾಮನನ್ನು ಬೆನ್ನಟ್ಟಿ ಬಂದಾಗ ಎಲ್ಲೂ ಅವನಿಗೆ ಆಶ್ರಯ ದೊರೆಯಲಿಲ್ಲ. ಅಲ್ಲಿ ಇಲ್ಲಿ ತಿರುಗಾಡುತ್ತಾ ಕೊನೆಗೆ ಕೆಳದಿ ರಾಜ್ಯದಲ್ಲಿ ಆಶ್ರಯ ಪಡೆದನು. ಚೆನ್ನಮ್ಮ ತನ್ನ ಮಂತ್ರಿಮಂಡಲದ ಜೊತೆ ಗುಪ್ತಾಲೋಚನೆ ನಡೆಸಿ, ತನ್ನ ಪರಿವಾರದೊಂದಿಗೆ ಬಂದಿದ್ದ ರಾಜಾರಾಮನಿಗೆ ಆಶ್ರಯ ಕೊಟ್ಟಳು. ಅವನಿಗೆ ಮನ್ನಣೆ ಮತ್ತು ಗೌರವವನ್ನು ಕೊಟ್ಟು ಆದರಿಸಿದಳು. ಮೊಘಲ್ ಸೈನಿಕರಿಗೆ ಬಲವಾದ ಪೆಟ್ಟು ಕೊಟ್ಟು ಅವರ ಮೇಲೆ ವಿಜಯವನ್ನು ಸಾಧಿಸಿದಳು. ಈ ಅಸಾಧಾರಣ ಧೈರ್ಯ ಅವಳಿಗೆ ಕೀರ್ತಿಯನ್ನು ತಂದುಕೊಟ್ಟಿತು. ಮತ್ತು ಎಲ್ಲರೂ ಅವಳನ್ನು ಪ್ರಶಂಸಿಸಿದರು.

ಚೆನ್ನಮ್ಮಳ ಈ ಅದ್ಭುತ ಸಾಹಸದ ಕಾರ್ಯವನ್ನು ಕೇಳಿ ಮೊಘಲ್ ಸಾಮ್ರಾಟನು ಅವಳನ್ನು ಅತಿಶಯವಾಗಿ ಹೊಗಳಿ, ಕುದುರೆಗಳನ್ನು, ಒಡವೆ ವಸ್ತ್ರಗಳನ್ನು ಕಾಣಿಕೆಯಾಗಿ ಕಳುಹಿಸಿಕೊಟ್ಟನು. ಅವಳ ಆಳ್ವಿಕೆಯಲ್ಲಿ ಅವಳ ಸಂಸ್ಥಾನ ಶತ್ರುಗಳಿಂದ ಮುಕ್ತವಾಗಿತ್ತು. ಅವಳ ಅಪ್ರಧಾನ ಪಾಳೆಯಗಾರರ ಮುಖ್ಯಸ್ಥರು ಶತ್ರುತ್ವವನ್ನು ತೋರಿಸಿದಾಗ ಅವರೆಲ್ಲರನ್ನು ದುರ್ಬಲಗೊಳಿಸಿ ತನ್ನ ಅಧೀನರನ್ನಾಗಿ ಮಾಡಿಕೊಂಡಳು.

ಈ ಪ್ರಕಾರ, ಬಸವರಾಜ ಬಹಳ ಹೆಮ್ಮೆಯಿಂದ ತನ್ನ ಒಲವಿನ ತಾಯಿ ಮೊಘಲರನ್ನು ಸೋಲಿಸಿ ಮರಾಠರ ಪ್ರಭು ರಾಜಾರಾಮನಿಗೆ ಆಶ್ರಯ ಕೊಟ್ಟದ್ದನ್ನು ವಿವರಿಸಿದ್ದಾನೆ. ಚೆನ್ನಮ್ಮ ಧರ್ಮೋದ್ಧಾರಕಳೂ ಆಶ್ರಯದಾತಳೂ ಆಗಿದ್ದಳೆಂದು ವಿವರಿಸಿದ್ದಾನೆ. ಆಕೆ ಮೂಕಾಂಬದೇವಿಗೆ ವಿಶಾಲವಾದ ಭೂಪ್ರದೇಶವನ್ನು ಬಿಟ್ಟುಕೊಟ್ಟಿದ್ದಳು ಮತ್ತು ಒಂದು ಅಗ್ರಹಾರವನ್ನು ಸ್ಥಾಪಿಸಿ ತನ್ನ ಜ್ಞಾಪಕಾರ್ಥವಾಗಿ ಚೆನ್ನಾಂಬಪುರ ಎಂದು ಅದಕ್ಕೆ ಹೆಸರಿಟ್ಟಳು. ಅನೇಕ ಮಠಗಳನ್ನು ಜಂಗಮರಿಗಾಗಿ ಕಟ್ಟಿಸಿದಳು ಮತ್ತು ಲಿಂಗ, ಜಂಗಮರ ಪೂಜೆಯನ್ನು ಪ್ರೋತ್ಸಾಹಿಸಿದಳು. ಪ್ರಾಚೀನ ಹಾಗೂ ನವೀನ ನಂಬಿಕೆಗಳೆರಡನ್ನೂ ಪೋಷಿಸುತ್ತಿದ್ದಳು. ಒಂದು ಲಕ್ಷ ತೊಂಭತ್ತಾರು ಸಾವಿರ ಜಂಗಮರುಗಳಿಗೆ ರಸಪೂರ್ಣವಾದ ಭೋಜನ ಮಾಡಿಸುತ್ತಿದ್ದಳು. ಈ ರೀತಿ ಜಂಗಮರ ಆಶೀರ್ವಾದವನ್ನೂ ಅವಳು ಪಡೆಯು

ತ್ತಿದ್ದಳು. ಅತಿಥಿಗಳಿಗೆ ಶ್ರದ್ಧೆಯಿಂದ ಭೋಜನ ನೀಡುವುದು ಅವಳ ಶ್ರೇಷ್ಠ ಧರ್ಮವಾಗಿತ್ತು.

ವೀರಶೈವ ಧರ್ಮದ ಶ್ರದ್ಧಾಳುವಾದ ಚೆನ್ನಮ್ಮ ಲಿಂಗ ಜಂಗಮರ ಪೂಜಾಲಕ್ಷಣಗಳನ್ನೂ ಹಾಗೂ ಪೂಜಾವಿಧಿಯನ್ನೂ ತಿಳಿದುಕೊಂಡಿದ್ದಳು ಮತ್ತು ಅದೇ ರೀತಿ ನಡೆದುಕೊಳ್ಳುತ್ತಿದ್ದಳು. ಕಾಲಕ್ರಮೇಣ ಈ ಎಲ್ಲ ಪದ್ಧತಿಗಳನ್ನು ತನ್ನ ಮಗನಿಗೆ ಅಭ್ಯಾಸ ಮಾಡಿಸಿದಳು ಮತ್ತು ಬಹಳ ಎಚ್ಚರಿಕೆಯಿಂದ ಹಾಗೂ ಶ್ರದ್ಧೆಯಿಂದ ಆಚರಿಸಲು ತಿಳಿಸಿದಳು. ಅವಳು ಬಸವರಾಜನಿಗೆ ಧರ್ಮವನ್ನು ಬೋಧಿಸಿದಳು ಮತ್ತು ಧಾರ್ಮಿಕ ಹಾಗೂ ಪ್ರಾಮಾಣಿಕ ಜೀವನವನ್ನು ನಡೆಸಲು ಉಪದೇಶಿಸಿದಳು. ಅವಳು ತನ್ನ ಮಗನಿಗೆ ಉಪದೇಶಿಸಿದ ಈ ಉಪದೇಶ ಎಲ್ಲರೂ ಅನುಕರಿಸಲು ಯೋಗ್ಯವಾಗಿದೆ. ಚೆನ್ನಮ್ಮ ಶಿವಪಾದ ಸೇರಿದಳೆಂದು ಶಿ.ತ.ರ. ತಿಳಿಸಿದೆ.

ಶಿ.ತ.ರ. ಕೆಳದಿ ರಾಜವಂಶದ ವಿವರಣೆಯಿಂದ ಪ್ರಾರಂಭವಾಗಿ ಚೆನ್ನಮ್ಮನ ಆಳ್ವಿಕೆಯ ವಿವರಣೆಯೊಂದಿಗೆ ಮುಕ್ತಾಯವಾಗಿದೆ. ಮೇಲೆ ಹೇಳಿದ, ಚೆನ್ನಮ್ಮಳಿಗೆ ಸಂಬಂಧಪಟ್ಟ ವಿವರಣೆ ಬಹಳ ಸಂಕ್ಷಿಪ್ತವಾಗಿದೆ. ಸಂಪೂರ್ಣ ಸಾಂಗೋಪಾಂಗವಾಗಿಲ್ಲ. ಆದರೆ ಚೆನ್ನಮ್ಮಳಿಗೆ ಸಂಬಂಧಪಟ್ಟ ಐತಿಹಾಸಿಕ ವಿಷಯಗಳು ಸಾಹಿತ್ಯಕ್ಕೆ ಮುಖ್ಯ ಉಗಮವಾಗಿದೆ ಎಂಬುದರಲ್ಲಿ ಸಂಶಯವೇ ಇಲ್ಲ.

ಶಿ.ತ.ರ. ಚೆನ್ನಮ್ಮಳ ಐತಿಹಾಸಿಕ ವಿವರಣೆಗಳ ಸಾಮಾನ್ಯ ನಿರೀಕ್ಷಣೆಯ ಆಧಾರದ ಮೇಲೆ ಕೆಳಗೆ ನಮೂದಿಸಿರುವ ವಿಷಯಗಳ ಸಾಕ್ಷಾತ್ಕಾರವಾಗುತ್ತದೆ. ಇವುಗಳಿಂದ ಶಿ.ತ.ರ. ಇತಿಹಾಸದ ಅಮೂಲ್ಯ ಉಗಮ ಪುಸ್ತಕ ಎನಿಸುತ್ತದೆ.

ಸೋಮಶೇಖರ ಹಾಗೂ ಚೆನ್ನಮ್ಮಳ ಆಳ್ವಿಕೆಯ ಸಮಯದಲ್ಲಿ ಅಕ್ಕಪಕ್ಕದ ರಾಜ್ಯಗಳಿಂದ ಸತತ ಘರ್ಷಣೆ ನಡೆಯುತ್ತಿತ್ತು. ಆಗಾಗ್ಗೆ ಪಾಳೆಯಗಾರರ ಮುಖ್ಯಸ್ಥರು ತಮ್ಮ ಗಡಿನಾಡು ಸ್ಥಳದಲ್ಲಿಯೇ ಇದ್ದು ಕೊಂಡು ತೊಂದರೆಯನ್ನು ಕೊಡುತ್ತಿದ್ದರು. ಆದರೆ ಕೆಳದಿಯ ರಾಜರುಗಳು ತಮ್ಮ ಶತ್ರುಗಳೊಂದಿಗೆ ಚಾಣಕ್ಷತೆ ಹಾಗೂ ಚತುರತೆಯಿಂದ ವ್ಯವಹರಿಸುತ್ತಿದ್ದರು. ಈ ಸಂಸ್ಥಾನದಲ್ಲಿ ಸೈನ್ಯದ ವ್ಯೂಹರಚನೆ ಹಾಗೂ ಪರಂಪರಾಗತ ಧೀರೋದಾತ್ತ ಸಂಪ್ರದಾಯವನ್ನು ಉಳಿಸಿಕೊಂಡಿದ್ದರು. ಸೇನಾಬಲಗಳನ್ನು ಪರಿಣಾಮಕಾರಿಯಾಗಿ ಸಜ್ಜುಗೊಳಿಸುತ್ತಿದ್ದರು. ಶತ್ರುಗಳೊಂದಿಗೆ ಯಾವ ರೀತಿ ಒಪ್ಪಂದ ಮಾಡಿ ಕೊಳ್ಳಬೇಕು, ಯಾರಿಗೆ ಆಶ್ರಯ ಕೊಡಬೇಕು ಮತ್ತು ಶರಣಾಗತರಾದವರನ್ನು ಯಾವ ರೀತಿ ಗೌರವಿಸಬೇಕೆಂಬುದು ಅವರಿಗೆ ತಿಳಿದಿತ್ತು.

ಕೆಳದಿಯ ಪ್ರಭುಗಳು ಪ್ರಾಮಾಣಿಕರಾಗಿದ್ದರು ಮತ್ತು ಪ್ರಾಮಾಣಿಕತೆಯಿಂದ ಜನಗಳನ್ನು ಆಳು ತ್ತಿದ್ದರು. ಧರ್ಮರಕ್ಷಣೆ ಮಾಡುವುದು ರಾಜರ ಅತಿ ಮುಖ್ಯವಾದ ಕರ್ತವ್ಯವೆಂದು ಅವರು ನಂಬಿದ್ದರು. ತ್ಯಾಗ ಮಾಡುವುದು, ಶ್ರೇಷ್ಠ ಕಾಣಿಕೆಗಳನ್ನು ಕೊಡುವುದು, ದೇವಸ್ಥಾನಗಳನ್ನು ಕಟ್ಟಿಸುವುದು ಮತ್ತು ಅವುಗಳ ನೂತನ ವ್ಯವಸ್ಥೆ ಅಥವಾ ಜೀರ್ಣೋದ್ಧಾರ, ಹಳ್ಳಿ ಮತ್ತು ಭೂಮಿಗಳನ್ನು ಅನುಗ್ರಹಿಸುವುದು, ಯಾತ್ರಾಸ್ಥಳಗಳಿಗೆ ಭೇಟಿ ಕೊಡುವುದು, ವಿವಿಧ ನಂಬಿಕೆಗಳನ್ನು ಪ್ರೋತ್ಸಾಹಿಸುವುದು, ಬ್ರಾಹ್ಮಣರಿಗೆ ಅಗ್ರಹಾರಗಳನ್ನು ಕಟ್ಟಿಸಿಕೊಡುವುದು, ಜಂಗಮರಿಗೆ ಭೂಮಿಗಳನ್ನು ಕೊಡುವುದು, ಬಾವಿಗಳನ್ನು ಹಾಗೂ ಸರೋವರಗಳನ್ನು ತೋಡಿಸುವುದು—ಇವೇ ಮುಂತಾದ ನಾನಾ ಬಗೆಯ ಕಾರ್ಯಕ್ರಮಗಳ ಮೂಲಕ ಧರ್ಮದ ರಕ್ಷಣಾಕಾರ್ಯ ಮಾಡುತ್ತಿದ್ದರು.

ಶಿ.ತ.ರ. ದಲ್ಲಿ ಮೇಲೆ ಹೇಳಿದ ಚೆನ್ನಮ್ಮಳ ಜೀವನಚರಿತ್ರೆ ಕೆಳದಿ ರಾಜ್ಯದಲ್ಲಿ ಉತ್ತರಾಧಿಕಾರಿಗಳನ್ನು ಆರಿಸುತ್ತಿದ್ದ ನಿಯಮಗಳನ್ನು ತಿಳಿಸುತ್ತದೆ. ತಂದೆಯ ನಂತರ ಮಗನೇ ರಾಜನಾಗಬೇಕೆಂಬ ಸಾಮಾನ್ಯ ನಿಯಮವಿದ್ದರೂ ಮಗ ಇಲ್ಲದಿದ್ದಲ್ಲಿ, ಸಗೋತ್ರದವರು ಉತ್ತರಾಧಿಕಾರಿಯಾಗಬಹುದಿತ್ತು. ಸೋಮಶೇಖರನ ದತ್ತುಪುತ್ರ ಗ್ರಂಥಕರ್ತೃ ಉತ್ತರಾಧಿಕಾರಿಯಾದಂತೆ ದತ್ತುಪುತ್ರ ಉತ್ತರಾಧಿಕಾರಿಯಾಗಬಹುದಿತ್ತು. ಕೆಲವೊಮ್ಮೆ ಚೆನ್ನಮ್ಮಳಂತೆ ಪತ್ನಿಯೂ ಸಹ ಉತ್ತರಾಧಿಕಾರಿಯಾಗುತ್ತಿದ್ದಳು. ಸೋಮಶೇಖರ ಚೆನ್ನಮ್ಮಳ ಸಹಕಾರದಿಂದ ರಾಜ್ಯವಾಳಿದಂತೆ ಜಂಟಿ ಪ್ರಭುಗಳ ಆಳ್ವಿಕೆಯೂ ಜಾರಿಯಲ್ಲಿತ್ತು.

ಶಿ.ತ.ರ. ದಲ್ಲಿ ಕೆಳದಿ ಇತಿಹಾಸವನ್ನು ಆಯ್ಕೆ ಮಾಡಿ ಬರೆಯುವಾಗ ಗ್ರಂಥದುದ್ದಕ್ಕೂ ಆಖ್ಯಾನಗಳಲ್ಲಿ ಆನಂದವನ್ನು ಉಂಟುಮಾಡುವಂತೆ ಘಟನೆಗಳನ್ನು ಅಳವಡಿಸುವಲ್ಲಿ ಗ್ರಂಥಕರ್ತರ ಜಾಣ್ಮೆ ಕಂಡುಬಂದಿದೆ. ಶಿ.ತ.ರ. ವಿಶಿಷ್ಟ ಭಾಗ, ಯಾವುದರಲ್ಲಿ ಚೆನ್ನಮ್ಮಳ ರಾಜಕೀಯ ಸಾಹಸ ಕಾರ್ಯಗಳಿವೆಯೋ ಅದು ಸಂಸ್ಕೃತದ ಆಖ್ಯಾನ ಕಾವ್ಯದ ಒಂದು ಸುಂದರ ನಮೂನೆ ಯಂತಿದೆ. ಈ ಆಖ್ಯಾನಗಳು ಸಂಸ್ಕೃತ ಸಾಹಿತ್ಯ ಸಂಪತ್ತಿಗೆ ಕೀರ್ತಿ ತರುತ್ತವೆ. ಅಲ್ಲದೆ ಈ ಭಾಗಗಳು ಆ ಸಮಯದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗಳ ಮೇಲೆ ಪ್ರಕಾಶ ಬೀರುತ್ತವೆ. ರಾಜಾರಾಮನಿಗೆ ಸಂಬಂಧಿಸಿದ ಐತಿಹಾಸಿಕ ಪ್ರಾಸಂಗಿಕ ಕಥೆಯನ್ನೂ ಸೇರಿಸಿರುವುದರಿಂದ ಮರಾಠ ಇತಿಹಾಸದ ಮುಖ್ಯ ಯುಗವನ್ನೂ ಸಹ ಸೇರಿಸಿದಂತಾಗಿದೆ.

ಕೆಳದಿಯ ಬಸವರಾಜನ ಶಿ.ತ.ರ. ಗ್ರಂಥ ಕೇವಲ ಸಂಸ್ಕೃತ ಸಾಹಿತ್ಯಕ್ಕೇ ಮಾತ್ರವಲ್ಲದೇ ಕರ್ನಾಟಕದ ಇತಿಹಾಸಕ್ಕೂ ಸಹ ಅತ್ಯಮೂಲ್ಯ ಹಾಗೂ ಅದ್ವಿತೀಯ ಕೊಡುಗೆಯಾಗಿದೆ.